# ಪದವಿ ಹಂತದಲ್ಲಿ ಇಂಗ್ಲಿಷ್ ಬೋಧನೆ:
# ಚಿಂತನೆ ಮತ್ತು ಕ್ರಿಯೆಯ ನಡುವಿನ ನೆರಳು

ಎಂ.ಜಿ. ಹೆಗಡೆ

ಕಳೆದ ನೂರೈವತ್ತು ವರ್ಷಗಳಲ್ಲಿ ನಮ್ಮ ದೇಶದಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನ-ಮಾನ ಏರಿಳಿತಗಳನ್ನು ಕಂಡಿದೆ; ಆ ಭಾಷೆಯನ್ನು ಕಲಿಯುವ ವಿದ್ಯಾರ್ಥಿಗಳ ಅಗತ್ಯಗಳು ಉದ್ದೇಶಗಳು ಬದಲಾಗಿವೆ; ಸಮಾಜದ ಅಪೇಕ್ಷೆ ನಿರೀಕ್ಷೆಗಳಲ್ಲಿ ಪಲ್ಲಟಗಳಾಗಿವೆ; ಇಂಗ್ಲಿಷ್ ಭಾಷಾ ಬೋಧನೆಯ ವಿವಿಧ ಆಯಾಮಗಳ ಕುರಿತು ಸಂಶೋಧನೆ ನಡೆಸಲೆಂದೇ ಸಂಸ್ಥೆಗಳು ಸ್ಥಾಪಿತವಾಗಿವೆ, ಸಂಶೋಧನೆಗಳೂ ನಡೆದಿವೆ; ಕಾಲಕಾಲಕ್ಕೆ ಭಾಷಾ ನೀತಿಗಳೂ, ಹಲವು ಸಮಿತಿ, ಅಧ್ಯಯನ ಗುಂಪುಗಳ ವರದಿಗಳೂ ಪ್ರಕಟವಾಗಿವೆ. ಭಾಷಾ ಬೋಧನೆ – ಕಲಿಕೆಯ ಕುರಿತ ನಮ್ಮ ಚಿಂತನೆಗಳು ಪ್ರಗಲ್ಭವಾಗಿವೆ; ಅರಿವು ಆಳವಾಗಿದೆ. ಆದರೆ ನಮ್ಮ ಆಚರಣೆ ಮಾತ್ರ ಚಿಂತನೆಗೆ ಅನುಗುಣವಾಗಿಲ್ಲ. ನಮ್ಮ ಹೆಚ್ಚಿನ ವಿಶ್ವವಿದ್ಯಾಲಯಗಳು ಹೊಸ ಬೆಳವಣಿಗೆಗಳು, ಸಂಶೋಧನೆಗಳು ಮತ್ತು ಚಿಂತನೆಗಳಿಗೆ ಬಹುತೇಕ ಸಂವೇದನಾಶೂನ್ಯವಾಗಿದ್ದು ಮೆಕಾಲೆ-ಗ್ರಾಂಟ್-ವುಡ್ ಪ್ರಣೀತ ಸಿದ್ಧಾಂತಗಳನ್ನೇ ನೆಚ್ಚಿಕೊಂಡು ಇಂಗ್ಲಿಷ್ ಭಾಷಾ ಬೋಧನೆಯು ಒಂದು ಅರ್ಥಹೀನ ಆಚರಣೆಯಾಗುವುದಕ್ಕೆ ದಾರಿಮಾಡಿಕೊಟ್ಟಿವೆ ಎನಿಸುತ್ತದೆ. ಹೀಗೆ ಅನ್ನಿಸುವುದು ಪದವಿ ತರಗತಿಗಳಲ್ಲಿ ಇಂಗ್ಲಿಷ್ ಭಾಷಾ ಬೋಧನೆಗಾಗಿ ಬಳಸಲಾಗುತ್ತಿರುವ ಪಠ್ಯಪುಸ್ತಕಗಳನ್ನೂ ಅವನ್ನು ಕಲಿತು ಪದವಿ ಪಡೆದ ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯವನ್ನೂ ಗಮನಿಸಿದಾಗ. ಆದರೂ 'ಬಹುತೇಕ' ಎಂಬ ವಿಶೇಷಣವನ್ನು ಬಳಸಿದ್ದೇಕೆಂದರೆ ಆಗ-ಈಗ ಅಲ್ಲಿ- ಇಲ್ಲಿ ಅಪರೂಪಕ್ಕೆಂಬಂತೆ ಕೆಲವು ವಿಶ್ವವಿದ್ಯಾಲಯಗಳ ಇಂಗ್ಲಿಷ್ ಅಧ್ಯಯನ ಮಂಡಳಿಗಳು ಕಾಲದ ಮತ್ತು ವಿದ್ಯಾರ್ಥಿಗಳ ಅಗತ್ಯಕ್ಕೆ ಸ್ಪಂದಿಸುವ ಪ್ರಯತ್ನಗಳನ್ನು ಮಾಡಿದ್ದಿದೆ. ಉದಾಹರಣೆಗೆ ಕುವೆಂಪು ವಿಶ್ವವಿದ್ಯಾಲಯದ 2010-11 ಸಾಲಿನ ಪಠ್ಯಪುಸ್ತಕ ಮತ್ತು 'ವರ್ಕ್ ಬುಕ್' ಗಳು ಹಾಗೂ ದಾವಣಗೆರೆ ವಿಶ್ವವಿದ್ಯಾಲಯದ 2012-13 ಸಾಲಿನ ಪಠ್ಯಪುಸ್ತಕ ಮತ್ತು 'ವರ್ಕ್ ಬುಕ್' ಗಳು. ಆದರೆ ಇಂತಹ ಪ್ರಯತ್ನಗಳೂ ಸಹಿತ ಅನುಷ್ಠಾನದಲ್ಲಿ ನಿರಂತರತೆ ಇಲ್ಲದೆಯೊ, ಬೋಧಕರಿಗೆ ಅಗತ್ಯವಾದ ತರಬೇತಿಯ ಅನುಪಸ್ಥಿತಿಯಿಂದಲೊ, ಬೆಂಬಲ ವ್ಯವಸ್ಥೆಯ ಕೊರತೆಯಿಂದಲೊ, ಬೋಧಕರು ಮತ್ತು ಯೋಜಕರ ಮನೋಭಾವದ ದೆಸೆಯಿಂದಲೊ ವಿಫಲವಾಗಿರುವುದೇ ಹೆಚ್ಚು. ಅಧ್ಯಯನ ಮಂಡಳಿಗಳಿಗೆ ಇದರ ಅರಿವಿದೆ – ಪದವಿ ತರಗತಿಗಳಲ್ಲಿ ಇಂಗ್ಲಿಷ್ ನಲ್ಲೇ ಹೆಚ್ಚು ವಿದ್ಯಾರ್ಥಿಗಳು ಅನುತ್ತೀರ್ಣರಾಗುವುದನ್ನೂ ಅಪೇಕ್ಷಿತ ಭಾಷಾ ಕೌಶಲಗಳನ್ನು ರೂಢಿಸಿಕೊಳ್ಳಲು ವಿಫಲರಾಗುವುದನ್ನೂ ಅವು ಗಮನಿಸಿವೆ. ಆದರೆ ಅಗತ್ಯ ಪರಿಹಾರ ಕ್ರಮಗಳ ಕಡೆ ಗಮನಹರಿಸುವುದಕ್ಕೆ ಬದಲು ಅವು ತಮ್ಮ ಅಳತೆಗೋಲನ್ನೇ ಕಿರಿದಾಗಿಸುವ, ವಿದ್ಯಾರ್ಥಿಗಳಿಂದ ಅತೀ ಕಡಿಮೆ ನಿರೀಕ್ಷಿಸುವ ಹಾಗೂ ಆ ಮೂಲಕ ಹೆಚ್ಚು ವಿದ್ಯಾರ್ಥಿಗಳು ಉತ್ತೀರ್ಣರಾಗುವಂತೆ ಮಾಡುವ ಹಲವು ಒಳದಾರಿಗಳನ್ನು ಕಂಡುಕೊಂಡಿವೆ. ಹೀಗಾಗಿ ಈಗ ಕಳೆದ ಒಂದೆರಡು ದಶಕಗಳ ಹಿಂದಿನ ಸ್ಥಿತಿಗೆ ಹೋಲಿಸಿದರೆ ಪರೀಕ್ಷಾ ಫಲಿತಾಂಶಗಳಲ್ಲಿ ಪ್ರಗತಿ ಕಂಡೀತು; ವಿದ್ಯಾರ್ಥಿಗಳ ಭಾಷಾ ಕೌಶಲದ ಆರ್ಜನೆಯಲ್ಲಿ ಅಲ್ಲ. ಹೀಗೆ ಇಂಗ್ಲಿಷ್ ಭಾಷಾ ಕಲಿಕೆಯ ಕುರಿತ ನಮ್ಮ ಚಿಂತನೆ ಮತ್ತು ಆಚರಣೆಯ ಮಟ್ಟದಲ್ಲಿ ಕಾಣುವ ವಾಸ್ತವ ಸ್ಥಿತಿ ಇವುಗಳ ಅಗಾಧ ಅಂತರವನ್ನು ಸೂಚಿಸಲೆಂದೇ ಈ ಪ್ರಸ್ತಾವದ ಶೀರ್ಷಿಕೆಯಲ್ಲಿ ಎಲಿಯಟ್ ನ 'ಟೊಳ್ಳು ಮನುಷ್ಯರು' ಕವನದ ಸಾಲನ್ನು ಆವಾಹಿಸಿರುವುದು.

ಇಂಗ್ಲಿಷ್ ಭಾಷಾ ವ್ಯಾಸಂಗದ ಈ ಶೋಚನೀಯ ಸ್ಥಿತಿಗೆ ಹಲವು ಹತ್ತು ಅಂತಃಸಂಬಂಧಿತ ಸಂಗತಿಗಳು ಕಾರಣವಾಗಿದ್ದು ಇಡೀ ವ್ಯವಸ್ಥೆಯೇ ಆಮೂಲಾಗ್ರವಾಗಿ ಬದಲಾಗಬೇಕೇ ವಿನಾ ಯಾವುದೋ ಒಂದೆರಡು ಸಂಗತಿಗಳನ್ನಷ್ಟೇ ಗಮನಿಸುವುದು ನಿರುಪಯುಕ್ತ ಎನ್ನುತ್ತೀರಾದರೆ ಅದು ಸರಳವಾಗಿ ಒಪ್ಪಿಕೊಳ್ಳಬಹುದಾದ ಮಾತು. ಆದರೆ ಈ ಪ್ರಸ್ತಾವದ ಉದ್ದೇಶ ತೀರ ಸೀಮಿತವಾದದ್ದು. ಪದವಿ ಮಟ್ಟವೆಂದರೆ ವಿದ್ಯಾರ್ಥಿಗಳಿಗೆ ತಮ್ಮ ಭಾಷಾ ಕೌಶಲ್ಯಗಳನ್ನು ಸುಧಾರಿಸಿಕೊಳ್ಳಲು ಕೊನೆಯ ಅವಕಾಶವಾಗಿರುವುದರಿಂದ ನಾವು ತುರ್ತಾಗಿ ಗಮನಿಸಬಹುದಾದ, ನಮ್ಮ ಮನೋಭಾವವನ್ನು ಕೊಂಚ ಬದಲಿಸಿಕೊಳ್ಳಬಲ್ಲೆವಾದರೆ ಒಂದು ಮಟ್ಟದ ಯಶಸ್ಸನ್ನು ಕಾಣಲು ಸಾಧ್ಯವೂ ಆಗಬಹುದಾದ ಕೇವಲ ಶಿಕ್ಷಣ ತಜ್ಞರ ಪರಿಧಿಗೆ ಸೇರಿದ ಒಂದೆರಡು ಸಂಗತಿಗಳನ್ನಷ್ಟೇ ಚರ್ಚೆಗಾಗಿ ಮುನ್ನೆಲೆಗೆ ತರುವುದು ಇದರ ಉದ್ದೇಶ.

ಇವುಗಳಲ್ಲಿ ಮೊದಲನೆಯದು ಮತ್ತು ಬಹುಶಃ ಅತ್ಯಂತ ಮುಖ್ಯವಾದದ್ದು ಭಾಷಾ ಬೋಧನಾ ಸಾಮಗ್ರಿ. ಪಠ್ಯಪುಸ್ತಕವೇ ಪದವಿ ತರಗತಿಗಳಲ್ಲಿ ಬಳಕೆಯಾಗುವ ಏಕೈಕ ಬೋಧನಾ ಸಾಮಗ್ರಿಯಾಗಿದೆ. ವರ್ಷಾಂತ್ಯದ / ಸೆಮಿಸ್ಟರ್ ಅಂತ್ಯದ ಪರೀಕ್ಷೆಯು ಕಟ್ಟುನಿಟ್ಟಾಗಿ ಪಠ್ಯಕೇಂದ್ರಿತವಾದದ್ದು. ಹೀಗಾಗಿ ಬೋಧನೆ-ಕಲಿಕೆ ಕೂಡ ಪಠ್ಯಕೇಂದ್ರಿತವೇ ಆಗಿರಬೇಕಾದದ್ದು ಇಲ್ಲಿ ಅನಿವಾರ್ಯ.  ಈ 'ಪಠ್ಯಪುಸ್ತಕ ಸಂಸ್ಕೃತಿ'ಯು ಕೇಂದ್ರೀಕೃತ ಅಧಿಕಾರದಲ್ಲಿ ವಿಶ್ವಾಸವಿಟ್ಟಿದ್ದ ವಸಾಹತುಶಾಹಿಯ ಕೊಡುಗೆ. ತನ್ನ ರಾಜಕೀಯ ಸತ್ತೆಯನ್ನು ಬಲಪಡಿಸಿಕೊಳ್ಳುವ ಮತ್ತು ತನ್ನ ಸಾಂಸ್ಕೃತಿಕ ಯಾಜಮಾನ್ಯವನ್ನು ವಸಾಹತುಗಳು ಒಪ್ಪಿಕೊಳ್ಳುವಂತೆ ಮಾಡುವ ಬ್ರಿಟಿಷ್ ವಸಾಹತುಶಾಹಿಯ ಹಲವು ದಾರಿಗಳಲ್ಲಿ ಪಠ್ಯಪುಸ್ತಕ ರೂಪಣೆ ಕೂಡ ಸೇರಿತ್ತು ಮತ್ತು ಪಠ್ಯಪುಸ್ತಕವೂ ಸಹ 'ದಿಗ್ವಿಜಯದ ಮೊಗವಾಡ'ವೇ ಆಗಿತ್ತೆಂದು ಹಲವು ಸಂಶೋಧನೆಗಳು ಈಗಾಗಲೇ ತೋರಿಸಿಕೊಟ್ಟಿವೆ. ಶುರುವಾತಿನಲ್ಲಿ ಇಂಗ್ಲೆಂಡಿನ ಇಂಗ್ಲಿಷ್ ಮಾತೃಭಾಷಿಕರಿಗಾಗಿ ಸಿದ್ಧಪಡಿಸಿದ ಪಠ್ಯಪುಸ್ತಕಗಳೇ ಇಲ್ಲಿಗೂ ಆಮದಾಗುತ್ತಿದ್ದರೆ ಮುಂದೆ ಇಲ್ಲಿಯೇ ಪಠ್ಯಪುಸ್ತಕಗಳನ್ನು ರೂಪಿಸುವಾಗಲೂ ಆ ಮಾದರಿಯನ್ನೇ ಬಳಸಲಾಯಿತು. ಅಂದರೆ ಭಾರತೀಯರು ಇಂಗ್ಲಿಷನ್ನು ವಿದೇಶೀ / ದ್ವಿತೀಯ ಭಾಷೆಯಾಗಿ ಕಲಿಯುತ್ತಾರೆ ಎಂಬ ಅಂಶವು ಆಗ ಸಂಪೂರ್ಣವಾಗಿ ಅವಗಣಿಸಲ್ಪಟ್ಟಿತ್ತು. ಬಹುಶಃ ಮಹಾಯುದ್ಧದ ಕಾಲದಲ್ಲಿ ಇದಕ್ಕೆ 'ಬೇಸಿಕ್ ಇಂಗ್ಲಿಷ್' ಎಂಬ ನಾಮಕರಣವಾಗಿರಬೇಕು. ಆದರೆ ಇದಕ್ಕೂ ಒಗ್ಡೆನ್ ರ ಶೋಧಕ್ಕೂ ಹೆಸರಿನ ಸಾಮ್ಯವನ್ನು ಬಿಟ್ಟರೆ ಬೇರಾವ ಸಂಬಂಧವೂ ಕಂಡುಬರದು. ಪಠ್ಯಪುಸ್ತಕದ ಈ ಸ್ವರೂಪದಿಂದಾಗಿಯೇ ಇಂಗ್ಲಿಷ್ ಭಾಷಾ ತರಗತಿ ಸಾಹಿತ್ಯ ವಿಮರ್ಶಾ ತರಗತಿಯೇ ಆಗಿರುತ್ತಿತ್ತೆಂದು ಕನ್ನಡ ನವೋದಯಕಾಲದ ವಿ. ಸೀತಾರಾಮಯ್ಯನಂತಹವರ ಆತ್ಮಚರಿತ್ರಾತ್ಮಕ ಬರಹಗಳಿಂದ ವಿದಿತವಾಗುತ್ತದೆ.

ಖೇದದ ಸಂಗತಿಯೆಂದರೆ ದ್ವಿತೀಯ ಭಾಷಾ ಆರ್ಜನೆಗೆ ಸಂಬಂಧಿಸಿದಂತೆ ಎಷ್ಟೆಲ್ಲ ಸಂಶೋಧನೆಗಳು ನಡೆದು ವಸಾಹತುಶಾಹಿ ಭಾಷಾ ಬೋಧನೆ-ಕಲಿಕೆಯ ಮಾದರಿ ನಿರುಪಯುಕ್ತವೆಂದು ಸಿದ್ಧವಾದ ಮೇಲೂ ಪಠ್ಯಪುಸ್ತಕಗಳು ಸಾಹಿತ್ಯ ಕೇಂದ್ರಿತವಾಗಿರುವುದು. ಮತ್ತೆ ಅವು ಗ್ರಹೀತವಾಗಿಟ್ಟುಕೊಂಡಿರುವ 'ಸಾಹಿತ್ಯ'ದ ಕಲ್ಪನೆ ಕೂಡ ವಸಾಹತುಶಾಹಿಯ ಕಾಲದ್ದೇ ಆಗಿದೆ. ಉದಾಹರಣೆಗೆ ಕರ್ನಾಟಕದಲ್ಲಿ ಪದವಿ ಮಟ್ಟದ ಕನ್ನಡ ಭಾಷಾ 'ಬೇಸಿಕ್' ಪಠ್ಯಪುಸ್ತಕಕ್ಕೂ ಇಂಗ್ಲಿಷ್ ಭಾಷಾ ಪಠ್ಯಪುಸ್ತಕಕ್ಕೂ ತಾತ್ತ್ವಿಕವಾಗಿ ಯಾವ ವ್ಯತ್ಯಾಸವೂ ಇಲ್ಲದಿರುವುದನ್ನು ಗಮನಿಸಬಹುದು. ಇವೆರಡೂ ಆಯಾ ಭಾಷೆಯಲ್ಲಿರುವ ಸಾಹಿತ್ಯ ಕೃತಿಗಳನ್ನೂ ವ್ಯಾಕರಣ ವಿವರಣೆಯನ್ನೂ ಪಠ್ಯಾಧಾರಿತ ಕೆಲವು ಪ್ರಶ್ನೆಗಳನ್ನೂ ಒಳಗೊಂಡಿರುತ್ತವೆ; ಇವೆರಡರಲ್ಲೂ ಒಂದೊಂದು ಸೆಮಿಸ್ಟರ್ ಗೂ ಒಂದೊಂದು ಸಾಹಿತ್ಯ ಪ್ರಕಾರಕ್ಕೆ ಸೇರಿದ ಪಠ್ಯಪುಸ್ತಕಗಳು ನಿಗದಿಗೊಳ್ಳುತ್ತವೆ. ತೀರ ಇತ್ತೀಚೆಗೆ ಹೊಸ ಶಿಕ್ಷಣ ನೀತಿಯ ಅನುಷ್ಠಾನದ ಅವಸರದಲ್ಲಿ 'ಬೇಸಿಕ್ ಇಂಗ್ಲಿಷ್' ಪತ್ರಿಕೆಯು ಸಾಮರ್ಥ್ಯ ವರ್ಧಿಸುವ

ಕಡ್ಡಾಯ ಕೋರ್ಸ್ ಅಡಿಯಲ್ಲಿ 'ಜನರಿಕ್ ಇಂಗ್ಲಿಷ್' ಎಂದು ಮರುನಾಮಕರಣಗೊಂಡಿದೆಯಾದರೂ ಹೆಚ್ಚಿನ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ (ಉದಾಹರಣೆಗೆ ಧಾರವಾಡ, ಬೆಳಗಾವಿ ವಿಶ್ವವಿದ್ಯಾಲಯಗಳು) ಹಿಂದಿನ ಪಠ್ಯಕ್ರಮ ಹಾಗೂ ಪಠ್ಯಪುಸ್ತಕಗಳೇ ಹೊಸ ಹೆಸರು ಹೊತ್ತು ಮುಂದುವರಿದಿವೆ. ಒಂದೇ ವ್ಯತ್ಯಾಸವೆಂದರೆ ಆಂತರಿಕ ಮೌಲ್ಯಮಾಪನಕ್ಕಿರುವ ಅಂಕಗಳನ್ನು ಏರಿಸಿ, ಓದಬೇಕಾದ ಪಾಠಗಳ ಸಂಖ್ಯೆಯನ್ನು ಇಳಿಸಿ ವಿದ್ಯಾರ್ಥಿಗಳು ನಪಾಸಾಗುವುದಿಲ್ಲ ಎನ್ನುವುದನ್ನು ಖಚಿತಪಡಿಸಿಕೊಳ್ಳಲಾಗಿದೆಯಷ್ಟೇ.

ಪಠ್ಯಪುಸ್ತಕಗಳ ಈ ಸ್ವರೂಪವು ಭಾಷಾ ಬೋಧನೆಯ ವಿಧಾನವನ್ನೂ ನೇರವಾಗಿ ಪ್ರಭಾವಿಸುತ್ತದೆ. ಅಪರಿಚಿತ ಸಾಂಸ್ಕೃತಿಕ ಆವರಣ, ನಿರ್ದಿಷ್ಟ ಪಾಠದ ಸಂದರ್ಭವನ್ನುಳಿದು ಬೇರೆಲ್ಲೂ ಬಳಸಲಾಗದ ಪದಗಳ ಬಾಹುಳ್ಯ, ಸಂಕೀರ್ಣ ವಾಕ್ಯರಚನೆ, ಕ್ಲಿಷ್ಟ ಅನುಸೂಚನೆಗಳಿಂದ ನಿಬಿಡವಾದ ಈ ಪಠ್ಯಪುಸ್ತಕಗಳನ್ನು ಬಳಸುವ ಸಾಮರ್ಥ್ಯವಾಗಲಿ ಆಸಕ್ತಿಯಾಗಲಿ ವಿದ್ಯಾರ್ಥಿಗಳಿಗೆ ಇಲ್ಲದಿರುವುದರಿಂದ ಶಿಕ್ಷಕರು ತರಗತಿಯ ಬಹುಭಾಗವನ್ನು ಪಠ್ಯವನ್ನು 'ಸರಳ'ಗೊಳಿಸುವ, ವ್ಯಾಖ್ಯಾನಿಸುವ, ಪರೀಕ್ಷೆಯಲ್ಲಿ ಪುನರುತ್ಪಾದಿಸಬಹುದಾದ 'ನೋಟ್ಸ್' ಗಳನ್ನು ನೀಡುವುದರಲ್ಲಿ ಕಳೆಯಬೇಕಾಗುತ್ತದೆ. ಇದಕ್ಕಿಂತ ಭಿನ್ನ ಆಯ್ಕೆ ಅವರಿಗಿರಲಾರದು. ಈ ದೀನ ಅಧೀನ ಪರಿಸ್ಥಿತಿಯಲ್ಲಿ ಶಿಕ್ಷಕರೊಮ್ಮೆ ಭಿನ್ನ ಆಯ್ಕೆಗೆ ಮನಸ್ಸು ಮಾಡಿದರೂ ಪರೀಕ್ಷಾ ಫಲಿತಾಂಶಗಳ ಮೇಲೆ ಕಣ್ಣು ಕೀಲಿಸಿಕೊಂಡಿರುವ ವಿದ್ಯಾರ್ಥಿಗಳ, ಪಾಲಕರ, ಆಡಳಿತ ವರ್ಗದ ಮೆಚ್ಚುಗೆಯನ್ನು ದೊರಕಿಸಿಕೊಳ್ಳುವುದು ಕಷ್ಟಸಾಧ್ಯ.

ಇಂತಹ ಪರಿಸ್ಥಿತಿ ಅಸಂಗತವಾಗಿರುವಂತೆ ಕಳವಳಕಾರಿಯೂ ಹೌದು. ಏಕೆಂದರೆ ಈ ಸಮಸ್ಯೆಗಿರುವ ಸಾಮಾಜಿಕ ಆಯಾಮ ನಿರ್ಲಕ್ಷಿಸಬಹುದಾದದ್ದಲ್ಲ. ಉನ್ನತ ಶಿಕ್ಷಣಕ್ಕೆ ಪ್ರವೇಶ ಪಡೆಯುತ್ತಿರುವ – ಅದರಲ್ಲೂ ಪದವಿ ಮಟ್ಟವನ್ನು ತಲುಪಿದ ಮೊದಲ ತಲೆಮಾರಿನ – ಲಕ್ಷಾಂತರ ವಿದ್ಯಾರ್ಥಿಗಳಿಗೆ ಈ ಶಿಕ್ಷಣದಿಂದ ತೆರೆದುಕೊಳ್ಳಬಹುದಾದ ಅವಕಾಶಗಳು, ಜ್ಞಾನ, ಅಧಿಕಾರಗಳಲ್ಲಿ ಪಾಲು ಪಡೆಯಲು ಇಂಗ್ಲಿಷ್ ಭಾಷೆಯಲ್ಲಿ ಪರಿಣತಿ ಹೊಂದುವುದು ತೀರ ಅಗತ್ಯ. ಇದುವರೆಗೂ ಚಿಕ್ಕ ಗಣ್ಯವರ್ಗಕ್ಕಷ್ಟೇ ಸೀಮಿತವಾಗಿದ್ದ ಅವಕಾಶಗಳು ಅವರಿಗೆ ಈಗಷ್ಟೇ ತೆರೆದುಕೊಳ್ಳುತ್ತಿವೆ. ಹೀಗಾಗಿ ಇಡೀ ವ್ಯವಸ್ಥೆ ಬದಲಾಗುವ ಪುನಃಸಂಯೋಜನೆಗೊಳ್ಳುವ ಮುಹೂರ್ತಕ್ಕಾಗಿ ಕಾದು ಕುಳಿತುಕೊಳ್ಳುವುದು ವಿವೇಕವೆನಿಸದು. ಮೇಲಾಗಿ ಶಿಕ್ಷಣ ನೀತಿಯ ತೊಡಕಿಲ್ಲ ಇಲ್ಲಿ; ಚಿಂತನೆಯ ಮಟ್ಟದ ಸಮಸ್ಯೆಯಲ್ಲ ಇದು. ಬದಲಾಗಿ ಹೆಚ್ಚಾಗಿ ಇದು ಅನುಷ್ಠಾನದ ಮಟ್ಟದಲ್ಲಿ ಅನುಷ್ಠಾನಗೊಳಿಸಬೇಕಾದವರ ಮನೋಭಾವದ ತೊಡಕು. ಹೀಗಾಗಿ ಪಠ್ಯಕ್ರಮ ಮತ್ತು ಪಠ್ಯಪುಸ್ತಕದ ಮಟ್ಟದಲ್ಲಿಯೇ ಸುಧಾರಣೆಯ ಆರಂಭ ಅಗತ್ಯವೆನಿಸುತ್ತದೆ.

ಬೋಧನೆಯ ಯಶಸ್ಸು ಶಿಕ್ಷಕರನ್ನೇ ಅವಲಂಬಿಸಿದೆ ಎಂಬ ವಾದವೊಂದಿದೆ. ಕೆಲವು ಶಿಕ್ಷಕರು ಅತೀ ಕೆಟ್ಟ ಪುಸ್ತಕವಿರುವಾಗಲೂ ಅತ್ಯುತ್ತಮ ಕಲಿಕಾನುಭವವನ್ನು ದೊರಕಿಸಿಕೊಡಬಲ್ಲರೆಂದೂ ಇನ್ನು ಕೆಲವರು ಅತ್ಯುತ್ತಮ ಪಠ್ಯಪುಸ್ತಕವಿದ್ದರೂ ತರಗತಿ ಫಲಪ್ರದವಾಯಿತು ಎನಿಸುವಂತೆ ಮಾಡಲಾರರು ಎನ್ನುವುದು ಈ ವಾದದ ತಿರುಳು. ಇದು ನಿಜವೇ. ನಮ್ಮೆಲ್ಲರಿಗೂ ಅನುಭವ ವೇದ್ಯವಾದದ್ದು ಕೂಡ. ಆದರೆ ಮೌಲಿಕವಾದ ಕಲಿಕಾನುಭವವನ್ನು ದೊರಕಿಸಿಕೊಡಬಲ್ಲ ಕೌಶಲದ ಕೊರತೆಯಿರುವ ಶಿಕ್ಷಕರಿದ್ದರೆ ಗತಿ ಏನು? ಅತ್ತ ಅವಲಂಬಿಸಬಹುದಾದ ಪಠ್ಯಪುಸ್ತಕವೂ ಇಲ್ಲ, ಇತ್ತ ಬೋಧನಾ ಫಲಿತವೂ ಶೂನ್ಯ ಎಂದಾಗಿಬಿಡುವುದಿಲ್ಲವೇ? ಸದ್ಯಕ್ಕೆ ಈ ಅಪಾಯವೇ ಹೆಚ್ಚು ನಿರೀಕ್ಷಿತವಾದದ್ದು. ಏಕೆಂದರೆ ಈಗಿರುವ ನಿಯಮಾವಳಿಗಳ ಪ್ರಕಾರ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ / ಪಿಎಚ್.ಡಿ ಪದವಿ ಪಡೆದವರೆಲ್ಲ ಪದವಿ ಮಟ್ಟದ ಇಂಗ್ಲಿಷ್ ಭಾಷಾ ಬೋಧಕರಾಗಲು ಅರ್ಹರಾಗುತ್ತಾರೆ. ಭಾಷಾ ಬೋಧನೆಗೆ ಪ್ರತ್ಯೇಕ ಸೂಕ್ತ ತರಬೇತಿ ಅಗತ್ಯವೆಂಬುದು ನಮ್ಮ ಸರಕಾರಗಳಿಗಿನ್ನೂ ಮನದಟ್ಟಾಗಿಲ್ಲ. ಇದೇ ರೀತಿ ಪಠ್ಯಕ್ರಮ

ರೂಪಿಸಲು ಬೋಧನಾನುಭವವೊಂದಿದ್ದರೆ ಸಾಕು ಎಂಬುದೂ ಅಪಕಲ್ಪನೆ. ಸೂಕ್ತ ತರಬೇತಿ ಪಡೆದವರು ಭಾಷಾ ಬೋಧನೆಯಲ್ಲಿ ಯಶಸ್ವಿಯಾಗುವ ಸಾಧ್ಯತೆ ಹೆಚ್ಚು; ತರಬೇತಿಯೊಂದಿಗೆ ಬೋಧನಾನುಭವವೂ ಸೇರಿದಾಗ ಪಠ್ಯಕ್ರಮ ರೂಪಿಸಲು ಅನುಕೂಲವಾಗುತ್ತದೆ ಎನ್ನುವುದು ಅನ್ವಯಿಕ ಭಾಷಾಶಾಸ್ತ್ರದ ಇಂದಿನ ನಿಲುವು. ಅಂದರೆ ಇಲ್ಲೂ ನಾವು ಚಿಂತನೆ ಮತ್ತು ಕ್ರಿಯೆಯ ನಡುವೆ ನೆರಳನ್ನು ಕಾಣುತ್ತೇವೆ. ಈ ಕಾರಣದಿಂದಲೂ ಶಿಕ್ಷಕರಿಗೆ ಮಾರ್ಗದರ್ಶನ ಮಾಡುವ, ವಿದ್ಯಾರ್ಥಿಗಳ ಸ್ವತಂತ್ರ ಪ್ರವೇಶಕ್ಕೂ ಅವಕಾಶವಿರುವ ಪಠ್ಯಪುಸ್ತಕಗಳ ಉತ್ಪಾದನೆ ತುರ್ತಾಗಿ ಗಮನಿಸಬೇಕಾದ ಸಂಗತಿಯಾಗಿದೆ.

ಪದವಿ ಮಟ್ಟದ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳನ್ನು ರೂಪಿಸುವಾಗ ಗಮನಿಸಬೇಕಾದ ಎರಡು-ಮೂರು ಸಂಗತಿಗಳನ್ನು ಮಾತ್ರ ಪ್ರಸ್ತಾವಿಸುವೆ. ಇಂಗ್ಲಿಷನ್ನು ದ್ವಿತೀಯ ಭಾಷೆಯಾಗಿ ಕಲಿಯುವ ವಿದ್ಯಾರ್ಥಿಗಳಿಗಾಗಿ ರೂಪಿಸುವ ಪಠ್ಯಪುಸ್ತಕಗಳು ಇಂಗ್ಲಿಷ್ ಸಾಹಿತ್ಯ ಕೇಂದ್ರಿತವಾಗಿರುವುದು ಒಂದು ಅತಿರೇಕವಾಗಿರುವಂತೆ ಕೇವಲ ಸಾಮಾನ್ಯ ಸಂಭಾಷಣೆ ಮತ್ತು ವ್ಯಾವಹಾರಿಕ ಬರವಣಿಗೆಯನ್ನಷ್ಟೇ ಬೋಧಿಸುವ ಉಪಯೋಗವಾದಿ ದೃಷ್ಟಿಕೋನವೂ ಇನ್ನೊಂದು ಅತಿರೇಕ. ಬಂಡವಾಳಶಾಹಿ ವ್ಯವಸ್ಥೆಯ ವಿನಮ್ರ ಸೇವಕರಾಗಿರಲು ಬೇಕಾದಷ್ಟು ಕೌಶಲಗಳನ್ನು ಮಾತ್ರವೇ ಕೊಡಮಾಡುವ ಪಠ್ಯಕ್ರಮಕ್ಕೆ ಮತ್ತು ಪಠ್ಯಪುಸ್ತಕಕ್ಕೆ ಇದು ದಾರಿ ಮಾಡಿಕೊಡುತ್ತದೆ. ಇವೆರಡರ ಮಧ್ಯದಲ್ಲಿರುವುದು ವಿದ್ಯಾರ್ಥಿಗಳನ್ನು ಭಾಷಾ ಸ್ವಾವಲಂಬಿಗಳನ್ನಾಗಿಸುವ, ಭಾಷಾ ಕೌಶಲವನ್ನೂ ಚಿಂತನಾ ಸಾಮರ್ಥ್ಯವನ್ನೂ ಒಟ್ಟೊಟ್ಟಿಗೇ ವರ್ಧಿಸುವ, ಮನುಷ್ಯರಾಗಿ ಬಾಳಲು ಅಗತ್ಯವಾದ ಮಾನವಿಕ ವಿದ್ಯಾಭ್ಯಾಸ. ಪದವಿ ಮಟ್ಟಕ್ಕೆ ಬರುವ ವಿದ್ಯಾರ್ಥಿಯ ವಯೋಮಾನ-ಸಹಜವಾದ ಆಸಕ್ತಿ ಅಪೇಕ್ಷಿಸುವುದು ಇದನ್ನೇ. ಹೀಗಾಗಿ ಸದ್ಯ ಬೇಕಾಗಿರುವುದು ಪದವಿ ಮಟ್ಟದ ವಿದ್ಯಾರ್ಥಿಯ ಆಸಕ್ತಿಗೆ ಅನುಗುಣವಾದ, ಅವನ/ಳನ್ನು ಆಲೋಚಿಸಲು, ತರಗತಿಯ ಚಟುವಟಿಕೆಗಳಲ್ಲಿ ಭಾಗವಹಿಸಲು ಆಹ್ವಾನಿಸುವ, ಸ್ವತಂತ್ರ ಪ್ರವೇಶಕ್ಕೂ ಅನುವು ಮಾಡಿಕೊಡುವ ಪಠ್ಯಪುಸ್ತಕ.

ಎರಡನೆಯದಾಗಿ ರಾಷ್ಟ್ರೀಯ ಶಿಕ್ಷಣ ನೀತಿ ಆಯೋಗದ 2006ರ ವರದಿಯ ಪ್ರಕಾರ ಪ್ರಾಥಮಿಕ ಮತ್ತು ಮಾಧ್ಯಮಿಕ ಮಟ್ಟದಲ್ಲೂ ಇಂಗ್ಲಿಷ್ ಭಾಷಾ ವ್ಯಾಸಂಗದ ಸ್ಥಿತಿ ಪದವಿ ಮಟ್ಟದಲ್ಲಿರುವುದಕ್ಕಿಂತ ತೀರ ಭಿನ್ನವಾಗಿಲ್ಲ. ಹೀಗಾಗಿಯೇ ಕಾಲೇಜಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳ ಭಾಷಾ ಕೌಶಲ್ಯ ನಿರೀಕ್ಷಿತ ಮಟ್ಟದಲ್ಲಿ ಇಲ್ಲದಿರುವುದು. ಈ ವಾಸ್ತವವನ್ನು ಒಪ್ಪಿಕೊಂಡೇ ನಾವು ಮುಂದುವರಿಯಬೇಕಾದದ್ದು ಅನಿವಾರ್ಯ; ಹಾಗೂ, ಪರಿಹಾರ (Remedial) ಕ್ರಮಗಳನ್ನು ಪದವಿಯ ಮೊದಲ ಸೆಮಿಸ್ಟರ್ ನಲ್ಲೇ ಒಳಗೊಳ್ಳುವುದು ಅವಶ್ಯ.

ಮೂರನೆಯದಾಗಿ, 1948ರ ನಂತರದಲ್ಲಿ ಇಂಗ್ಲಿಷ್ ಶೀಘ್ರವಾಗಿ ಕಣ್ಮರೆಯಾಗುತ್ತದೆ ಎಂಬ ವಿಶ್ವಾಸದಲ್ಲಿ ಇಂಗ್ಲಿಷ್ ಭಾಷಾ ಬೋಧನೆಗಾಗಿ ಇರುತ್ತಿದ್ದ ವರ್ಷಗಳಲ್ಲೂ ವೇಳಾಪತ್ರಿಕೆಯಲ್ಲಿ ಮೀಸಲಿರುತ್ತಿದ್ದ ಅವಧಿಯಲ್ಲೂ ಕಡಿತಗೊಳಿಸಲಾಗಿತ್ತು. ದೇಶಭಾಷೆಗಳು ಕಲಿಕಾ ಮಾಧ್ಯಮವಾಗಿರುವ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳು ಮತ್ತು ಇಂಗ್ಲಿಷ್ ತರಗತಿಗಳು ಮಾತ್ರವೇ ಭಾಷಾ ಆಕರವೂ ಅದಕ್ಕೆ ಒಡ್ಡಿಕೊಳ್ಳುವ ಮತ್ತು ಅದನ್ನು ಅಭ್ಯಾಸ (practice) ಮಾಡುವ ಅವಕಾಶವೂ ಆಗಿದೆ ಎಂಬುದನ್ನು ಮರೆಯುವಂತಿಲ್ಲ. ಈ ಹಿನ್ನೆಲೆಯಲ್ಲಿ ಪೂರಕ ಓದಿನ ಸಾಮಗ್ರಿ, ವರ್ಕ್ ಬುಕ್ ಹಾಗೂ ಮನೆಗೆಲಸಗಳು ಪಠ್ಯಪುಸ್ತಕದ ಭಾಗವಾಗಿ ಇಂಗ್ಲಿಷ್ ಲಭ್ಯತೆಯಲ್ಲಿರುವ ಅರಕೆಯನ್ನು ತುಂಬಿಕೊಡಬೇಕಾಗುತ್ತದೆ.

ಇಲ್ಲಿ ಪ್ರಸ್ತಾವಿಸಿರುವ ಯಾವ ಸಂಗತಿಯೂ ಹೊಸದಲ್ಲ. ಭಾರತದಲ್ಲಿ ಇಂಗ್ಲಿಷ್ ಬೋಧನೆಯ ಕುರಿತಾದ ಅತ್ಯಂತ ಸಮಗ್ರವೂ ವಿವರವೂ ಆದ ವಿ.ಕೆ. ಗೋಕಾಕರ ಅಧ್ಯಕ್ಷತೆಯ 1969ರ ಅಧ್ಯಯನ ಗುಂಪಿನ ವರದಿಯೇ ಪದವಿ ಮಟ್ಟದಲ್ಲಿ 'ಮೆನ್' (ಸಂಪನ್ಮೂಲ ವ್ಯಕ್ತಿಗಳು / ಶಿಕ್ಷಕ ತರಬೇತಿ), 'ಮೆಟೀರಿಯಲ್ಸ್' (ಪಠ್ಯಪುಸ್ತಕಗಳು) ಹಾಗೂ

‘ಮೆಥಡ್ಸ್’ (ಬೋಧನಾ ವಿಧಾನ) ಇವು ಪದವಿ ಮಟ್ಟದ ಇಂಗ್ಲಿಷ್ ಬೋಧನೆಗೆ ಸಂಬಂಧಿಸಿದಂತೆ ತುರ್ತಾಗಿ ಗಮನಿಸಬೇಕಾದ ಸಂಗತಿಗಳೆಂದು ಗುರುತಿಸಿತ್ತು. ದುರದೃಷ್ಟವಶಾತ್ ಈ ಚಿಂತನೆ ಕ್ರಿಯೆಯಾಗಿ ಅನುವಾದಗೊಳ್ಳದೇ ನಾವು ಇಂದಿಗೂ ಗೊಣಗುತ್ತಲೇ ಇರುವಂತಾಗಿದೆ. ವ್ಯವಸ್ಥೆಯ ಆಮೂಲಾಗ್ರ ಬದಲಾವಣೆಗಾಗಿ ಕಾಯದೇ ಮುಖ್ಯ ಭಾಗೀದಾರರ ಮನೋಭಾವದ ಬದಲಾವಣೆ ಹಾಗೂ ಸ್ವಲ್ಪ ಹೆಚ್ಚಿನ ಪರಿಶ್ರಮದಿಂದ ಧನಾತ್ಮಕ ಬದಲಾವಣೆ ಸಾಧ್ಯವಾಗಬಹುದೆಂಬ ನಿರೀಕ್ಷೆಯಿಂದ ಈ ಪ್ರಸ್ತಾವ ಮಾಡಿದ್ದು. ಇಷ್ಟೂ ಸ್ಪಂದಿಸುವುದಿಲ್ಲವಾದರೆ ಎಲಿಯಟ್ ನ ‘ಟೊಳ್ಳು ಮನುಷ್ಯರು’ ಕವನದ ಅಂವೇ ಇಲ್ಲಿಯೂ ಕಂಡುಬರುವುದು:

ಲೋಕ ಕೊನೆಯಾಗುವುದು ಈ ರೀತಿಯಲ್ಲೇ
ಲೋಕ ಕೊನೆಯಾಗುವುದು ಈ ರೀತಿಯಲ್ಲೇ
ಲೋಕ ಕೊನೆಯಾಗುವುದು ಈ ರೀತಿಯಲ್ಲೇ
ಗುಡುಗುತ್ತ ಅಲ್ಲ, ಗೊಣಗುತ್ತ…

***

**ಪರಾಮರ್ಶನೆಗಳು:**


1. Hancher, Michael. 2014, “College English in India: The First Textbook”. Victorian Literature and Culture, Vol. 42, No. 3 (2014), pp. 553-572, 609
2. Kumar, Krishna. “Origins of India's ‘Textbook Culture’”. Comparative Education Review, Nov. 1988, Vol. 32, No. 4 (Nov., 1988), pp. 452- 464
3. Kumar, Krishna. 1986, “Textbooks and Educational Culture”. Economic and Political Weekly, Jul. 26, Vol. 21, No. 30 (Jul. 26, 1986), pp. 1309-1311
4. National Knowledge Commission Report to the Nation, 2006. New Delhi: NKC, 2007
5. Report of the Study Group on Teaching of English, 1971 Ministry of Education and Youth Services: New Delhi
6. Richards, I. A. “Basic English”. 1945, The Modern Language Journal, Jan. Vol. 29, No. 1 (Jan. 1945), pp. 60-65
7. Viswanathan, Gauri 1989 (1989) Masks of Conquest: Literary Study and British Rule in India. New York: Columbia University Press



**ಎಂ ಜಿ ಹೆಗಡೆ:** ಕುಮಟಾದ ಡಾ. ಎ. ವಿ. ಬಾಳಿಗಾ ಕಾಲೇಜಿನಲ್ಲಿ ಇಂಗ್ಲಿಷ್ ವಿಭಾಗ ಮುಖ್ಯಸ್ಥ, ಬೆಳಗಾವಿಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಅಧ್ಯಯನ ವಿಭಾಗದ ಪ್ರಾಧ್ಯಾಪಕ, ಮುಖ್ಯಸ್ಥ, ಭಾಷಾನಿಕಾಯದ ಡೀನ್ ಆಗಿಯೂ ಸಹ ಕಾರ್ಯ ನಿರ್ವಹಿಸಿದ್ದಾರೆ. ಇಂಗ್ಲಿಷ್‌ನಲ್ಲಿ ಪಿಹೆಚ್.ಡಿ., ಪಿ.ಜಿ.ಡಿ.ಟಿ.ಇ., ಡಿ.ಲಿಟ್. ಪದವಿಗಳನ್ನು ಹೊಂದಿರುವ ಇವರಿಗೆ ಮುವತ್ತು ವರ್ಷಗಳ ಬೋಧನಾನುಭವ ಇದೆ. Rethinking Tagore, Aspects of ELT, Initiation: Essays in Language, Literature and Education, And Where Shall I Roost, Our Own Voices, ಅಕ್ಕಮಹಾದೇವಿ ವಿಶ್ವವಿದ್ಯಾಲಯದ ಬಿ. ಎ. ಇಂಗ್ಲಿಷ್ ಐಚ್ಛಿಕ ತರಗತಿಗಳಿಗಾಗಿ ಎಂಟು ಪಠ್ಯಪುಸ್ತಕಗಳು, ಕಟಾಂಜನ, ಸಹಯಾನ, ಗೌರೀಶ ಕಾಯ್ಕಿಣಿ, ಬೆಳಕಿನ ಬೆಳೆ, ಕಂಪಿನ ಕರೆ, ಸಮುದಾಯದ ಗಾಂಧಿ ಮೊದಲಾದವು ಇವರ ಪ್ರಕಟಿತ ಪುಸ್ತಕಗಳು. ಕೇಂದ್ರ ಸಾಹಿತ್ಯ

ಅಕಾಡೆಮಿಯ ಕನ್ನಡ ಸಲಹಾ ಸಮಿತಿಯ ಸದಸ್ಯರಾಗಿದ್ದ ಅವರು ಈಗ ಚಿಂತನ, ಉತ್ತರ ಕನ್ನಡದ ಸಂಚಾಲಕರೂ ಆಗಿದ್ದಾರೆ. ಹವ್ಯಾಸವಾಗಿ ರಂಗಭೂಮಿಯಲ್ಲಿ ತೊಡಗಿಸಿಕೊಂಡಿರುವ ಇವರು ತಾಳಮದ್ದಲೆಗಳಲ್ಲಿ ಅರ್ಥ ಹೇಳುತ್ತಾರೆ ಹಾಗೂ ಎಂಟು ನಾಟಕಗಳನ್ನು ರಚಿಸಿದ್ದಾರೆ. mghegde2001@gmail.com